

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2163 |
| ಸದಸ್ಯರ ಹೆಸರು | : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ |
| ಉತ್ತರಿಸುವ ದಿನಾಂಕ | : | 18.03.2022 |
| ಉತ್ತರಿಸುವ ಸಚಿವರು | : | ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡವರ ಕುಲಶಾಸ್ತ್ರೀಯ ಅಧ್ಯಯನ ಕಾರ್ಯ ಪ್ರಾರಂಭವಾಗಿದೆಯೇ; ಪ್ರಾರಂಭವಾಗಿದ್ದಲ್ಲಿ, ಅಧ್ಯಯನ ಕಾರ್ಯದ ಪ್ರಗತಿ ಯಾವ ಹಂತದಲ್ಲಿದೆ; | ಸರ್ಕಾರದ ಆದೇಶ ಸಂಖ್ಯೆ: ಸಕಇ 229 ಎಸ್ಎಡಿ 2016, ದಿನಾಂಕ:01.12.2016 ರಂತೆ ಕೊಡಗು ಜಿಲ್ಲೆಯ ಕೊಡವ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನ ಕಾರ್ಯವನ್ನು ನಿರ್ದೇಶಕರು, ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯವರು ಕೈಗೊಂಡಿರುತ್ತಾರೆ ಹಾಗೂ ಕೊಡವರ ಕುಲಶಾಸ್ತ್ರೀಯ ಅಧ್ಯಯನ ಕಾರ್ಯ ಪೂರ್ಣಗೊಂಡಿರುತ್ತದೆ. |
| ಆ) | ಕೊಡವರ ಕುಲುಶಾಸ್ತ್ರೀಯ ಅಧ್ಯಯನ ಕಾರ್ಯ ಪ್ರಾರಂಭವಾದ ಬಗ್ಗೆ ಅಧಿಕೃತ ಆದೇಶ ಹೊರಡಿಸಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಕೊಡವರ ಕುಲಶಾಸ್ತ್ರೀಯ ಅಧ್ಯಯನವನ್ನು ಕೈಗೊಳ್ಳಲು ಸರ್ಕಾರ ಆದೇಶ ಹೊರಡಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ:ಸಕಇ 229 ಎಸ್ಎಡಿ 2016, ದಿನಾಂಕ:01.12.2016ರ ಪ್ರತಿಯನ್ನು ಲಗತ್ತಿಸಿದೆ. |
| ಇ) | ಕೊಡವರ ಕುಲಶಾಸ್ತ್ರೀಯ ಅಧ್ಯಯನ ಕಾರ್ಯವನ್ನು ಕೈಗೊಂಡಿರುವ ಸಂಸ್ಥೆ ಯಾವುದು ಮತ್ತು ಸದರಿ ಸಂಸ್ಥೆಗೆ ವರದಿ ನೀಡಲು ಯಾವ ಕಾಲಮಿತಿಯನ್ನು ನಿಗಧಿಗೊಳಿಸಲಾಗಿದೆ; | ಸರ್ಕಾರದ ಆದೇಶದಂತೆ ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯು ಕೊಡವ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನವನ್ನು ಕೈಗೊಂಡಿದ್ದು, ದಿನಾಂಕ:01.12.2016ರ ಆದೇಶದಲ್ಲಿ 03 ತಿಂಗಳ ಅವಧಿಯನ್ನು ನಿಗದಿಪಡಿಸಲಾಗಿತ್ತು. |
| ಈ) | ಸದರಿ ಅಧ್ಯಯನ ಕಾರ್ಯ ಕೈಗೊಂಡಿರುವ ಸಂಸ್ಥೆಯು ಯಾವಾಗ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಿದೆ; | ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯು ಕೊಡವ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನದ ಅಂತಿಮ ವರದಿಯನ್ನು ದಿನಾಂಕ:05.06.2021 ರಂದು ಸಲ್ಲಿಸಲಾಗಿದೆ. |
| ಉ) | ಯಾವ ಕಾಲಮಿತಿಯೊಳಗೆ ಕೊಡವರ ಬುಡಕಟ್ಟು ಜನಾಂಗದ ಬೇಡಿಕೆ ಬಗ್ಗೆ ಸರ್ಕಾರ ಸಕಾರಾತ್ಮಕ ನಿರ್ಣಯ ಕೈಗೊಳ್ಳಲಿದೆ? | ದಿನಾಂಕ:05.06.2021 ರಂದು ಕುಲಶಾಸ್ತ್ರೀಯ ಅಧ್ಯಯನದ ಅಂತಿಮ ವರದಿಯು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಪ್ರಸ್ತುತ ಪರಿಶೀಲನಾ ಹಂತದಲ್ಲಿದೆ. |

ಸಕಇ 61 ಎಸ್ಎಡಿ 2022

(ಬಿ. ಶ್ರೀರಾಮುಲು)
ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು.